ಡಾ॥ ಜಿ. ಎಸ್. ದೀಕ್ಷಿತ್

# ಆಗ್ನೇಯ ಏಷ್ಯಾ ಮತ್ತು ಕರ್ನಾಟಕ-ಪುರಾತನ ಸಂಬಂಧಗಳು

ಕರ್ನಾಟಕದವರು ಪುರಾತನ ಆಗ್ನೇಯ ಏಷ್ಯಾದ ಇತಿಹಾಸದಲ್ಲಿ ಯಾವ ಪಾತ್ರವನ್ನು ವಹಿಸಿದ್ದರೆನ್ನುವುದನ್ನು ತಿಳಿಸುವುದು ಈ ಪ್ರಬಂಧದ ಉದ್ದೇಶ. ೧೯೧೨ ರಲ್ಲಿ ಸರ್ ಚಾರ್ಲಸ್ ಈಲಿಯಟ್ ಎನ್ನುವ ಬ್ರಿಟಿಷ್ ವಿದ್ವಾಂಸರು ಕಾಂಬೋಜಾದಲ್ಲಿಯ ದೇವಸ್ಥಾನಗಳಿಗೂ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ ದೇವಸ್ಥಾನಗಳಿಗೂ ಕೆಳಕಂಡ ಹೋಲಿಕೆಗಳಿವೆಯೆಂದು ಹೇಳುತ್ತಾರೆ :

೧. ಎರಡೂ ದೇಶಗಳ ದೇವಸ್ಥಾನಗಳಲ್ಲಿಯ ಮುಖ್ಯ ದೇವತೆಗಳು ಹರಿಹರ, ವಾಮನ ಮತ್ತು ನರಸಿಂಹ. ಪಟ್ಟದಕಲ್ಲು ಮತ್ತು ಅಂಕರ್‌ವಾಟಿನಲ್ಲಿ ಸಮುದ್ರಮಥನ ಮತ್ತು ರಾಮಾಯಣದ ಚಿತ್ರಗಳಿವೆ.

೨. ದೇವಸ್ಥಾನಗಳು ಒಂದು ಜಗತಿಯ ಮೇಲಿ ಇವೆ.

೩. ಎರಡೂ ಕಡೆಗಳಲ್ಲಿಯೂ ಇಳಿಜಾರಾದ ಮಾಳಿಗೆ, ಒಳಗಿನ ಗೋಡೆಗಳ ಮೇಲೆ ಉಬ್ಬು ವಿಗ್ರಹಗಳು ಮತ್ತು ಹೊರಗಿನ ಗೋಡೆಗಳ ಮೇಲೆ ಜಾಲಾಂಧ್ರಗಳಿವೆ.

೪. ಕಾಂಬೋಜಾದ ಅತಿ ಪುರಾತನ ಶಾಸನ ೭ನೇ ಶತಮಾನದ ಆರಂಭದ ಕಾಲಕ್ಕೆ ಸೇರಿದೆ. ಅದರ ಲಿಪಿ ಪಟ್ಟದಕಲ್ಲಿನಲ್ಲಿರುವ ಪಾಪನಾಥ ದೇವಸ್ಥಾನದಲ್ಲಿಯ ಶಾಸನದ ಲಿಪಿಯನ್ನು ಹೋಲುತ್ತದೆ.

೫. ಕಾಂಬೋಜಾದ ರಾಜರ ಹೆಸರುಗಳ ಕೊನೆಗೆ ವರ್ಮನ್ ಎಂದಿದೆ. (ಕದಂಬರ ಹೆಸರುಗಳು ಹೀಗೆ ಇವೆ).

೬. ಚಾಲುಕ್ಯರು ಖ್ಮೇರರನ್ನು ಗೆದ್ದರೆಂದು ಹೇಳುತ್ತಾರೆ. (ಅವರ ಶಾಸನದಲ್ಲಿ ಇವರನ್ನು ಕಮೇರರೆಂದು ಕರೆದಿದೆ).

೭. ಕಾಂಬೋಜಾದಲ್ಲಿ ರಾಜನನ್ನು ದೇವತೆಯೆಂದು ಪರಿಗಣಿಸಿ ಪೂಜೆ ಮಾಡುತ್ತಿದ್ದರು. ಚಂಪಾ ಮತ್ತು ಜಾವಾಗಳಲ್ಲಿ ಒಬ್ಬ ರಾಜನು ಒಂದು ದೇವಸ್ಥಾನವನ್ನು ಕಟ್ಟಿದರೆ ಅದರಲ್ಲಿಯ ದೇವರನ್ನು ರಾಜನ ಹೆಸರಿನಿಂದ ಕರೆಯುವ ರೂಢಿಯಿತ್ತು. ಭದ್ರವರ್ಮನು ಶಿವನಿಗೆ ಒಂದು ದೇವಸ್ಥಾನವನ್ನು ಕಟ್ಟಿ ಆ ದೇವರನ್ನು ಭದ್ರೇಶ್ವರನೆಂದು ಕರೆದನು. ಪಟ್ಟದಕಲ್ಲಿನಲ್ಲಿಯೂ ಅದೇ ಪದ್ಧತಿಯಿತ್ತು. ವಿಜಯಾದಿತ್ಯನು ವಿಜೆಯೇಶ್ವರ ದೇವಸ್ಥಾನವನ್ನು, ಲೋಕ ಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ಲೋಕೇಶ್ವರ ಮತ್ತು ತ್ರೈಲೋಕೇಶ್ವರರಿಗೆ ದೇವಸ್ಥಾನಗಳನ್ನು ಕಟ್ಟಿದರು.

೮. ಕರ್ನಾಟಕದಲ್ಲಿದ್ದ ಹಾಗೆ ಕಾಂಬೋಜಾದಲ್ಲಿಯೂ ಪಾಶುಪತರು ಪ್ರಬಲರಾಗಿದ್ದರು. ಮುಂದೆ ಕರ್ನಾಟಕದ ವೀರಶೈವರಲ್ಲಿ ಪ್ರಚಲಿತವಾದ ತತ್ವಗಳು, ವಿಚಾರಗಳು ಕಾಂಬೋಜಾದಲ್ಲಿಯೂ ಇದ್ದವೆಂದು ಹೇಳುತ್ತಾರೆ. ಈಲಿಯಟ್ಟಿನ ಅಭಿಪ್ರಾಯದಲ್ಲಿ ಇವೆಲ್ಲದರ ತಾತ್ಪರ್ಯವು ಕಾಂಬೋಜಾದಲ್ಲಿ ಬೇರೂರಿದ ಭಾರತೀಯ ಮತ ಮತ್ತು ಸಂಸ್ಕೃತಿ ದಖನ್ನಿನದು.

೧೯೧೨ರಲ್ಲಿ ಈಲಿಯಟ್ ಬರೆದಿದ್ದನ್ನು ಕಲ್ಕತ್ತಾ ವಿಶ್ವವಿದ್ಯಾಲಯದ ಡಾ॥ ಕಲ್ಯಾಣಕುಮಾರ ದಾಸ ಗುಪ್ತರು ಅರ್ಧ ಶತಮಾನದ ನಂತರ ಸಮರ್ಥಿಸಿ ಹೀಗೆ ಬರೆದಿದ್ದಾರೆ : "ಅಂಕರ್‌ವಾಟಿನ ದೇವಸ್ಥಾನಗಳಿಗೂ ನಕ್ಷತ್ರಾಕಾರದ ಕರ್ನಾಟಕದ ದೇವಸ್ಥಾನಗಳಿಗೂ ಇರುವ ಹೋಲಿಕೆಗಳು ಅತ್ಯಾಶ್ಚರ್ಯವನ್ನುಂಟು ಮಾಡುತ್ತವೆ. ಕರ್ನಾಟಕ ಮತ್ತು ಕಾಂಬೋಡಿಯಾಗಳ ಮಧ್ಯ ಇದ್ದ ಸಾಂಸ್ಕೃತಿಕ ಸಂಬಂಧಗಳು ವ್ಯಾಪಾರದಿಂದ ಉಂಟಾಗಿರ ಬೇಕು. ದೇವಸ್ಥಾನಗಳನ್ನು ಕಟ್ಟಿರುವ ರೀತಿ ಅಲ್ಲದೆ ರಾವಣಾನುಗ್ರಹಮೂರ್ತಿಯಂತಹ ಶಿಲ್ಪಗಳು ಎರಡೂ ಕಡೆಯೂ ದೊರೆಯುತ್ತವೆ. ಭದ್ರವರ್ಮನ ಶಾಸನವು ಪಶ್ಚಿಮ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಪೆಟ್ಟಿಗೆಯಂತಹ ತಲೆ ಕಟ್ಟು ಇರುವ ಲಿಪಿಯಲ್ಲಿ ಬರೆದಿದೆ. ಆರನೆಯ ಶತಮಾನದಲ್ಲಿ ಚಾಲುಕ್ಯರಲ್ಲಿ ರೂಢಿಯಲ್ಲಿದ್ದ ಶಕ ಸಂವತ್ಸರವು ಇಂಡೋಚೀನಾ ಮತ್ತು ಇಂಡೋನೀಶಿಯಾಗಳಲ್ಲಿ ಜಾರಿಗೆ ಬಂತು. ಇವೆಲ್ಲವುಗಳಿಂದ ಭಾರತೀಯ ಸಂಸ್ಕೃತಿಯನ್ನು ಕಾಂಬೋಜಾ ಮತ್ತು ನೆರೆಹೊರೆಯ ಪ್ರಾಂತಗಳಲ್ಲಿ ಕರ್ನಾಟಕವು ಹರಡಿದ್ದು ಕಂಡು ಬರುತ್ತದೆ. ಇನ್ನು ಈ ದಿಶೆಯಲ್ಲಿ ಹೆಚ್ಚಿಗೆ ಮಾಹಿತಿ ದೊರೆಯಬೇಕಾದರೆ ಕನ್ನಡ ಸಾಹಿತ್ಯದ ಅಭ್ಯಾಸ ಸಹಾಯಕವಾಗಬಹುದು."

ಡಾ॥ ದಾಸಗುಪ್ತರ ಊಹೆ ಸರಿಯಾದುದೆಂದು ಅವರಿಗಿಂತ ಮುಂಚೆ ನಡೆಸಿದ ಡಾ॥ ಎ. ವೆಂಕಟಸುಬ್ಬಯ್ಯನವರ ಪಂಚತಂತ್ರದ ಮೇಲಿನ ಸಂಶೋಧನೆಯಿಂದ ತಿಳಿದುಬಂದಿದೆ. ದುರ್ಗಸಿಂಹನ ಕನ್ನಡ ಪಂಚತಂತ್ರಕ್ಕೆ ವಸುಭಾಗನ ಪಂಚತಂತ್ರವೂ ಆಧಾರವಾಗಿತ್ತು. ಇದೇ ವಸುಭಾಗನ ಪಂಚತಂತ್ರವು ಇಂಡೋನೀಶಿಯಾದ ತಂತ್ರಿಯೆನ್ನುವ ಗ್ರಂಥಕ್ಕೂ, ತೀಯಾಸದ ಮುಲ್ಲಾತಂತ್ರೈಯೆನ್ನುವ ಗ್ರಂಥಕ್ಕೂ ಮತ್ತು ಸಂಸ್ಕೃತದ ತಂತ್ರೋಪಖ್ಯಾನಕ್ಕೂ ಆಧಾರವಾಗಿತ್ತೆಂದು ಡಾ॥ ವೆಂಕಟಸುಬ್ಬಯ್ಯನವರು ತೋರಿಸಿಕೊಟ್ಟಿದ್ದಾರೆ.

ಕರ್ನಾಟಕದ ಕೆಲವು ಕಡೆ ಪಂಚತಂತ್ರದ ಕಥೆಗಳನ್ನಾಧರಿಸಿದ ಶಿಲ್ಪಗಳು ಕಂಡುಬರುತ್ತವೆ. ಈ ಸ್ಥಳಗಳಲ್ಲಿ ಕೆಲವು ಯಾವೆಂದರೆ ಪಟ್ಟದಕಲ್ಲು, ಬಳ್ಳಿಗಾವೆ ಮತ್ತು ಶಿರಸಿಯ ಹತ್ತಿರವಿರುವ ಐಸಳೆ, ಜಾವಾದಲ್ಲಿ ಮೆಂದುತ್, ಪನತರನ್, ಚಂಡಿಜಾಗೊಗಳಲ್ಲಿ ಪಂಚತಂತ್ರದ ಕಥೆಗಳು ಶಿಲ್ಪದಲ್ಲಿ ಕಾಣಿಸಿಕೊಂಡಿವೆ.

ಡಾ॥ ಎಸ್. ನಾಗರಾಜು ಇವರು ಮೇಲೆ ಹೇಳಿದ್ದನ್ನು ಸಮರ್ಥಿಸಿ, ಆಗ್ನೇಯ ಏಷ್ಯಾ ಮತ್ತು ಕರ್ನಾಟಕ ಮತ್ತು ದಕ್ಷಿಣಭಾರತದಲ್ಲಿ ಪ್ರಚಲಿತವಿರುವ ರಾಮಾಯಣ ಮತ್ತು ಮಹಾಭಾರತ ಕಥೆಗಳು ಆಗ್ನೇಯ ಏಷ್ಯಾದಲ್ಲಿ ಹರಡಿವೆಯೊ ಹೇಗೊ ಎನ್ನುವುದನ್ನು ನೋಡಬೇಕೆನ್ನುತ್ತಾರೆ. ಕರ್ನಾಟಕದ ವಾಸ್ತುಶಿಲ್ಪದ ಬೆಳವಣಿಗೆ ಮತ್ತು ಆಗ್ನೇಯ ಏಷ್ಯಾದ ವಾಸ್ತುಶಿಲ್ಪದ ಬೆಳವಣಿಗೆಗಳಲ್ಲಿಯ ಸಾಮ್ಯಗಳನ್ನು ಹೆಚ್ಚು ಆಳವಾಗಿ ಅಭ್ಯಾಸ ಮಾಡಬೇಕೆಂದು ಹೇಳುತ್ತಾರೆ. ಈ ರೀತಿಯಾಗಿ ಲಿಪಿ, ಸಾಹಿತ್ಯ ಮತ್ತು ವಾಸ್ತುಶಿಲ್ಪಗಳಲ್ಲಿ ಎರಡೂ ಭಾಗಗಳಲ್ಲಿಯೂ ಸಾಮ್ಯಗಳನ್ನು ಹೆಚ್ಚು ಆಳವಾಗಿ ಅಭ್ಯಸಿಸುವ ಅಗತ್ಯವನ್ನು ಇದುವರೆಗೂ ಹೇಳಿದ್ದರಿಂದ ತಿಳಿದುಕೊಳ್ಳಬಹುದು. ಯಾಕೆಂದರೆ ನಮ್ಮ ಸಂಸ್ಕೃತಿಯ ಅತ್ಯಂತ ಗಾಢವಾದ ಅಭ್ಯಾಸವನ್ನು ಮಾಡಿದ ಡಾ॥ ಆನಂದಕುಮಾರಸ್ವಾಮಿಯವರು ಹೇಳಿದ ಹಾಗೆ, ಕಾಂಬೋಡಿಯಾ, ಚಂಪಾ ಮತ್ತು ಜಾವಾಗಳ ಕಲೆ ಮತ್ತು ಸಂಸ್ಕೃತಿಗಳಲ್ಲಿ ದಖನ್ನಿನ ಮೂಲಗಳಿವೆಯೆ ವಿನಹ ದಕ್ಷಿಣ ಭಾರತದ ಮೂಲಗಳಿಲ್ಲ.

ಇಷ್ಟೆಲ್ಲಾ ಕರ್ನಾಟಕದವರು ಆಗ್ನೇಯ ಏಷ್ಯಾದಲ್ಲಿ ಸಂಸ್ಕೃತಿ ಪ್ರಸಾರ ಮಾಡಿದರು, ಇಲ್ಲವೆ ಮಾಡಿರಬಹುದು ಎಂದು ಹೇಳುತ್ತೀರಿ, ಇಂತಹ ಕರ್ನಾಟಕದ ಹೆಸರು ಒಂದು ಸಲವಾದರೂ ಎಲ್ಲಿಯಾದರೂ ಬರುತ್ತದೆಯೆ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರ, ಒಂದು ಸಲ ಬರುತ್ತದೆಂದು ಹೇಳಬಹುದು.

೧೩೬೫ರಲ್ಲಿ, ಒಬ್ಬ ಮಜಪಹಿತ್ ವಂಶದ ಜಾವಾದ ದೊರೆಯ ವೈಭವವನ್ನು ವರ್ಣಿಸುವ ನಗರಕೆರ್ತಾಗಮವೆನ್ನುವ ಗ್ರಂಥದಲ್ಲಿ ಜಾವಾಕ್ಕೆ ಎಲ್ಲಿ ಎಲ್ಲಿಂದ ಪ್ರವಾಸಿಗಳು ಬರುತ್ತಿದ್ದರೆಂದು ವರ್ಣಿಸುವಾಗ ಈ ರೀತಿ ಹೇಳಿದೆ : "All kinds of people have continually come from other countries in multitudes. They are China, Yavana, Champa, Karnataka, Goda (Gaur) and Siam. These are places from where they come.

They come by ship with numerous merchants: monks and Brahmins are the principal ones who as they come are regaled and are well pleased during their stay."

ಈ ಉಲ್ಲೇಖದಿಂದ ಜಾವಾಕ್ಕೆ ಭಾರತದಿಂದ ಕರ್ನಾಟಕ ಮತ್ತು ಬಂಗಾಳದಿಂದ ವರ್ತಕರು, ಭಿಕ್ಷುಗಳು ಮತ್ತು ಬ್ರಾಹ್ಮಣರು ಹಡಗಿನಲ್ಲಿ ಬಹು ಸಂಖ್ಯೆಯಲ್ಲಿ ಹೋಗಿ ಅಲ್ಲಿ ಸುಖವಾಗಿದ್ದರೆಂದು ತಿಳಿಯಬರುತ್ತದೆ.

ಇದುವರೆಗೂ ಈ ವಿಷಯದ ಅಭ್ಯಾಸವು ಸಾಕಷ್ಟು ಆಗಿಲ್ಲ. ಎರಡೂ ಭಾಗಗಳಲ್ಲಿಯ ಸಾಹಿತ್ಯ, ಶಾಸನ ಮತ್ತು ಕಲೆಗಳ ಅಭ್ಯಾಸದ ಅಗತ್ಯವಿದೆಯೆನ್ನುವುದರಲ್ಲಿ ಸಂಶಯವಿಲ್ಲ.

* * *

## ಆಧಾರಗಳ ಬಗ್ಗೆ ಟಿಪ್ಪಣಿ

ಸರ್ ಚಾರ್ಲ್ಸ್ ಈಲಿಯಟ್‌ನ Hinduism and Buddhism ಎನ್ನುವ ಮೂರು ಸಂಪುಟಗಳ ಗ್ರಂಥದಲ್ಲಿ ಈ ಮತಗಳು ಭಾರತದಲ್ಲಿ ಹೇಗೆ ಬೆಳೆದವೆನ್ನುವುದನ್ನು ಹೇಳುವುದಲ್ಲದೆ, ಆಗ್ನೇಯ ಏಷ್ಯಾ ಮತ್ತು ಚೀನಾಗಳಲ್ಲಿಯೂ ಅವುಗಳಇತಿಹಾಸವನ್ನು ಹೇಳಿದೆ. ಅದರ ೩ನೇ ಸಂಪುಟ ೧೦೬ನೇ ಪುಟದಿಂದ ಮುಂದೆ ಕರ್ನಾಟಕ ಮತ್ತು ಆಗ್ನೇಯಾ ಏಷ್ಯಾದಲ್ಲಿಯ ದೇವಸ್ಥಾನಗಳಲ್ಲಿಯ ಸಾಮ್ಯವನ್ನು ತೋರಿಸಿಕೊಟ್ಟಿದೆ. ಈ ಗ್ರಂಥವು ಹಿಂದೂ ಮತ್ತು ಬೌದ್ಧ ಮತಗಳ ತತ್ವಗಳನ್ನು ತಿಳಿಸಿಕೊಡುವುದಲ್ಲದೆ ಅವುಗಳು ಪರದೇಶಗಳಲ್ಲಿ ಹರಡಿರುವುದನ್ನು ತಿಳಿಸುತ್ತದೆ. ಇದು ೧೯೧೨ರಲ್ಲಿ ಮೊದಲನೆ ಸಲ ಪ್ರಕಟವಾಯಿತು. ಇತ್ತೀಚೆಗೆ ಇದರ ಪುನರ್ಮುದ್ರಣವಾಗಿದೆ. ನಾನು ಮೊದಲನೆಯ ಆವೃತ್ತಿಯನ್ನು ಉಪಯೋಗಿಸಿದ್ದೇನೆ.

ಕಲ್ಕತ್ತಾ ವಿಶ್ವವಿದ್ಯಾಲಯದ ಪುರಾತನ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಡಾ॥ ಕಲ್ಯಾಣಕುಮಾರ ದಾಸಗುಪ್ತರು ದಕ್ಷಿಣ ಭಾರತದ ಅದರಲ್ಲಿಯೂ ಕರ್ನಾಟಕದ ಕಲೆಯ ಇತಿಹಾಸದಲ್ಲಿ ತಜ್ಞರು. ಡಾ॥ ಎನ್. ಪಿ. ಸೆನ್ ಇವರು ಸಂಪಾದಿಸಿರುವ Sourcesof theHistory of India ಮೊದಲನೆಯ ಸಂಪುಟದಲ್ಲಿ ಕರ್ನಾಟಕ ಇತಿಹಾಸದ ಆಧಾರಗಳು ಎನ್ನುವ ಡಾ॥ ದಾಸಗುಪ್ತರ ಲೇಖನದಲ್ಲಿ ಮೇಲೆ ಹೇಳಿದ ಅವರ ಅಭಿಪ್ರಾಯಗಳಿವೆ.

ಹೈದರಾಬಾದ್ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಅಧ್ಯಾಪಕರಾಗಿರುವ ಡಾ॥ ಎಸ್. ನಾಗರಾಜು ಇವರ 'ಆಗ್ನೇಯ ಏಷ್ಯಾದೊಡನೆ ಕರ್ಣಾಟಕದ ಸಾಂಸ್ಕೃತಿಕ ಸಂಬಂಧ' ಎಂಬ ಲೇಖನವು 'ಪ್ರಬುದ್ಧ ಕರ್ಣಾಟಕ', ಸಂಪುಟ ೫೧, ಸಂಚಿಕೆ ೩ರಲ್ಲಿ (೧೯೬೯) ಇದೆ. ಈ ಲೇಖನದಿಂದ ಮೇಲೆ ಹೇಳಿದ ಅವರ ಅಭಿಪ್ರಾಯಗಳನ್ನು ನಾನು ಉದಾಹರಿಸಿದ್ದೇನೆ.

Harry J. Bendeಯವರು ಸಂಪಾದಿಸಿದ The World of South-East Asia, Selected Readings ಎನ್ನುವ ಗ್ರಂಥದಲ್ಲಿಯ The Legendary Grandeur of Majapahit ಎನ್ನುವ ಅಧ್ಯಾಯದಲ್ಲಿ ೪೬ನೆಯ ಪುಟದಲ್ಲಿ ಈ ಲೇಖನದಲ್ಲಿಯ ಕೊನೆಯ ಉದ್ಧರಣವು ಇದೆ.